# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 653 |
| **ಸದಸ್ಯರ ಹೆಸರು** | ಡಾ ವೈ.ಎ ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| **ಉತ್ತರಿಸಬೇಕಾದ ದಿನಾಂಕ** | 22.02.2022 |
| **ಉತ್ತರಿಸಬೇಕಾದ ಸಚಿವರು** | ಮಾನ್ಯ ಉನ್ನತ ಶಿಕ್ಷಣ, ಐಟಿ ಬಿಟಿ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |
| **ಪ್ರಶ್ನೆ** | **ಉತ್ತರ** |
| ಅ) ಸ್ಟಾರ್ಟ್‌ಆಫ್ ಕಾರ್ಯಕ್ರಮದ ಉದ್ದೇಶವೇನು? | ಕರ್ನಾಟಕದಲ್ಲಿ ಸ್ಟಾರ್ಟ್ ಅಪ್ ಕಾರ್ಯಕ್ರಮದ ಉದ್ದೇಶವು ಈ ಕೆಳಕಂಡಂತಿರುತ್ತದೆ:-<br>• ಕರ್ನಾಟಕದಲ್ಲಿ ಉತ್ಪನ್ನ ಸ್ಟಾರ್ಟ್‌ಅಪ್‌ಗಳನ್ನು ಒಳಗೊಂಡಂತೆ ತಂತ್ರಜ್ಞಾನ ಆಧಾರಿತ ಸ್ಟಾರ್ಟ್ ಅಪ್‌ಗಳ ಬೆಳವಣಿಗೆ ಉತ್ತೇಜಿಸುವುದು.<br>• ಸ್ಟಾರ್ಟ್‌ಅಪ್ ವಲಯದಲ್ಲಿ ಹೆಚ್ಚಿನ ಉದ್ಯೋಗಾವಕಾಶಗಳನ್ನು ಸೃಜಿಸಲು ಕ್ರಮ ವಹಿಸುವುದು.<br>• ಆರೋಗ್ಯ ಪಾಲನೆ, ಆಹಾರ ಭದ್ರತೆ, ಶುದ್ಧ ಪರಿಸರ ಹಾಗೂ ಎಲ್ಲರಿಗೂ ಶಿಕ್ಷಣ ಇತ್ಯಾದಿ ವಲಯಗಳಲ್ಲಿ ಸಾಮಾಜಿಕ ಪರಿಣಾಮವಿರುವ ನಾವೀನ್ಯತಾ ತಂತ್ರಜ್ಞಾನ ಪರಿಹಾರಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವುದು.<br>• ಸ್ಟಾರ್ಟ್‌ಅಪ್‌ಗಳಲ್ಲಿರುವ ನ್ಯೂನ್ಯತೆಗಳನ್ನು ಗುರುತಿಸಿ, ಅಗತ್ಯವಾದ ಮಾರ್ಗದರ್ಶನ, ಜ್ಞಾನ ಮತ್ತು ಸಂಪರ್ಕ ಜಾಲವನ್ನು ಸ್ಪಷ್ಟ ರೂಪುರೇಷೆಯೊಂದಿಗೆ ಒದಗಿಸುವ ಮೂಲಕ ಅಂತಹ ಸ್ಟಾರ್ಟ್ ಅಪ್‌ಗಳಿಗೆ ವಾಣಿಜ್ಯೋದ್ಯಮದ ಪೂರ್ವ ಯಾತ್ರೆಯಲ್ಲೇ ಒತ್ತು ನೀಡುವುದು.<br>• ಸ್ಟಾರ್ಟ್ ಅಪ್ ಕಾರ್ಯಕ್ರಮದಲ್ಲಿ ಮುಖಾಮುಖಿ ಮಾರ್ಗದರ್ಶನ ಗೋಷ್ಠಿಗಳು, ಕಮ್ಮಟಗಳು ತರಬೇತಿ ಕಾರ್ಯಕ್ರಮಗಳು ವಿಚಾರ ಸಂಕೀರ್ಣಗಳು ಸಂಪರ್ಕ ಜಾಲ ಸಮಾವೇಶಗಳು, ಅಂತರ ರಾಷ್ಟ್ರೀಯ ಪಾಲುದಾರಿಕೆ ಸಭೆಗಳು ಮತ್ತು ಬೂಟ್ ಕ್ಯಾಂಪ್‌ಗಳು ಹಾಗೂ ಹೂಡಿಕೆದಾರರ ಸಮಾವೇಶಗಳನ್ನು ಆಯೋಜಿಸುವುದು ಹೊರ ವಲಯಗಳಲ್ಲಿ ಮೂಲ ಸೌಕರ್ಯ ಒದಗಿಸುವಿಕೆ ಇತ್ಯಾದಿ ಅನುಕೂಲ ಕಲ್ಪಿಸುವುದು.<br>• ಸ್ಟಾರ್ಟ್‌ಅಪ್‌ನ ಅಗತ್ಯತೆಗನುಗುಣವಾಗಿ ಸಲಹೆಗಾರರನ್ನು ಗುರುತಿಸಿ ಸದರಿ ಸಲಹೆಗಾರರು ಹಾಗೂ ಸ್ಟಾರ್ಟ್ ಅಪ್‌ಗಳೊಂದಿಗೆ ಪರಿಚಯ ಮತ್ತು ಚರ್ಚೆ ಏರ್ಪಡಿಸುವುದು. |

| | |
|---|---|
| ಆ) ಕಳೆದ ಮೂರು ವರ್ಷಗಳಲ್ಲಿ ಈ ಕಾರ್ಯಕ್ರಮದ ಅಡಿಯಲ್ಲಿ ವ್ಯಾಪಾರಿಗಳು ಮತ್ತು ಉದ್ಯಮಿಗಳಿಗೆ ಧನ ಸಹಾಯ ಮತ್ತು ಪ್ರೋತ್ಸಾಹವನ್ನು ಒದಗಿಸಲಾಗಿದೆಯೇ; (ಜಿಲ್ಲಾವಾರು ಮಾಹಿತಿ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ ಈ ಕಾರ್ಯಕ್ರಮದ ಅಡಿಯಲ್ಲಿ ಸುಮಾರು 399 ನವೋದ್ಯಮಿಗಳಿಗೆ ಧನ ಸಹಾಯವನ್ನು ಒದಗಿಸುವ ಸಲುವಾಗಿ ರೂ. 9,272ಲಕ್ಷಗಳನ್ನು ಮೀಸಲಿರಿಸಿದ್ದು, ಸದರಿ ಮೊತ್ತದಲ್ಲಿ ಈಗಾಗಲೇ ರೂ. 7,057.57ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಜಿಲ್ಲಾವಾರು ಮಾಹಿತಿಯನ್ನು **ಅನುಬಂಧ-1**ರಲ್ಲಿ ಲಗತ್ತಿಸಿದೆ. |
| ಇ) ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ಸೃಷ್ಟಿಯಾದ ಉದ್ಯೋಗಾವಕಾಶಗಳ ಪ್ರಮಾಣ ಎಷ್ಟು? | ಕಳೆದ ಮೂರು ವರ್ಷಗಳಲ್ಲಿ ಸರ್ಕಾರದಿಂದ ಧನಸಹಾಯ ಒದಗಿಸಿದ ಸ್ಟಾರ್ಟ್ ಅಪ್‌ಗಳಲ್ಲಿ ಸುಮಾರು 1,400 ಖಾಯಂ ಉದ್ಯೋಗಿಗಳು ಹಾಗೂ 700 ಅರೆಕಾಲಿಕ ಉದ್ಯೋಗಿಗಳು ಸೇರಿ, ಒಟ್ಟಾರೆಯಾಗಿ ಈ ವಲಯದಲ್ಲಿ ಅಂದಾಜು 2,100 ಉದ್ಯೋಗಾವಕಾಶಗಳು ಸೃಷ್ಟಿಯಾಗಿರುತ್ತವೆ. |

ಐಟಿಬಿಟಿ 17 ಎಲ್ ಸಿಎಂ 2022

**(ಡಾ|| ಸಿ. ಎನ್. ಅಶ್ವಥ್ ನಾರಾಯಣ)**
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು.

**<u>ಅನುಬಂಧ-1</u>**

| [redacted] | | | | |
|---|---|---|---|---|
| 1 | ಬಾಗಲಕೋಟೆ | 1 | 10 | 10 |
| 2 | ಬೆಳಗಾವಿ | 5 | 110 | 55 |
| 3 | ಬಳ್ಳಾರಿ | 3 | 50 | 31.5 |
| 4 | ಬೆಂಗಳೂರು | 267 | 6381 | 4900.07 |
| 5 | ಬೆಂಗಳೂರು ಗ್ರಾಮಾಂತರ | 12 | 310 | 279 |
| 6 | ಬೀದರ್ | 6 | 110 | 79 |
| 7 | ಬಿಜಾಪುರ | 3 | 50 | 50 |
| 8 | ಚಿಕ್ಕಬಳ್ಳಾಪುರ | 2 | 30 | 21.5 |
| 9 | ಚಿಕ್ಕ ಮಗಳೂರು | 1 | 30 | 15 |
| 10 | ದಕ್ಷಿಣ ಕನ್ನಡ | 11 | 290 | 202.5 |
| 11 | ದಾವಣಗೆರೆ | 2 | 55 | 46.5 |
| 12 | ಧಾರವಾಡ | 30 | 706 | 510.5 |
| 13 | ಹಾವೇರಿ | 1 | 15 | 7.5 |
| 14 | ಹುಬ್ಬಳ್ಳಿ | 5 | 126 | 115 |
| 15 | ಕಲ್ಬುರ್ಗಿ | 10 | 126 | 95 |
| 16 | ಕಾರವಾರ | 1 | 15 | 15 |
| 17 | ಮಂಡ್ಯ | 2 | 60 | 46.5 |
| 18 | ಮೈಸೂರು | 12 | 231 | 166.5 |
| 19 | ರಾಯಚೂರು | 3 | 50 | 30 |
| 20 | ರಾಮನಗರ | 2 | 60 | 44 |
| 21 | ತುಮಕೂರು | 8 | 155 | 107 |
| 22 | ಉಡುಪಿ | 7 | 182 | 156.5 |
| 23 | ಉತ್ತರ ಕನ್ನಡ | 5 | 120 | 74 |
| | **Grand Total** | **399** | **9,272** | **7,057.57** |